**ಕರ್ನಾಟಕ ವಿಧಾನ ಪರಿಷತ್ತು**

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ. ಎಂ. ಎ. ಗೋಪಾಲಸ್ವಾಮಿ
ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 82
ಉತ್ತರಿಸಬೇಕಾದ ದಿನಾಂಕ : 02.02.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರವು ಹಾಲು ಉತ್ಪಾದಕರ ಸಹಕಾರ ಸಂಘಗಳ ಮೂಲಕ ಸಂಘದ ಸದಸ್ಯರಿಗೆ ಸಾಲ ನೀಡುವ ಯೋಜನೆಯನ್ನು ಜಾರಿಗೊಳಿಸಿದೆಯೇ; ಜಾರಿಗೊಳಿಸಿದ್ದಲ್ಲಿ, ಈ ಯೋಜನೆಯು ಯಾವ ದಿನಾಂಕದಿಂದ ಜಾರಿಗೆ ಬಂದಿದೆ; ಮತ್ತು ಇದಕ್ಕೆ ರೂಪಿಸಿರುವ ಮಾನದಂಡಗಳೇನು; (ಆದೇಶಗಳ ಸಹಿತ ಸಂಪೂರ್ಣ ವಿವರ ನೀಡುವುದು) | ರಾಜ್ಯ ಸರ್ಕಾರವು ಹಾಲು ಉತ್ಪಾದಕರ ಸಹಕಾರ ಸಂಘಗಳ ಮೂಲಕ ಸಂಘದ ಸದಸ್ಯರಿಗೆ ಸಾಲ ನೀಡುವ ಯೋಜನೆಯನ್ನು ಜಾರಿಗೊಳಿಸಿರುವುದಿಲ್ಲ.<br><br>ಆದರೆ, ಸರ್ಕಾರದ ಆದೇಶ ಸಂ: ಸಿಒ 209 ಸಿಎಲ್ಎಸ್ 2020 ದಿ:22-07-2020 ರೀತ್ಯಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ/ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ. ಇದರ ಮೂಲಕ ಹೈನುಗಾರಿಕೆ ಮತ್ತು ಮೀನುಗಾರಿಕೆಗೆ ದುಡಿಯುವ ಬಂಡವಾಳ ಉದ್ದೇಶಕ್ಕಾಗಿ ಕಿಸಾನ್ ಕ್ರೆಡಿಟ್ ಕಾರ್ಡ್ ಮೂಲಕ ಸಾಲ ವಿತರಿಸುವ ಯೋಜನೆ ಜಾರಿಗೊಳಿಸಲಾಗಿದೆ.<br>ಈ ಯೋಜನೆ ಅನುಷ್ಠಾನಗೊಳಿಸಲು ಈ ಕೆಳಕಂಡ ಮಾನದಂಡಗಳನ್ನು ರೂಪಿಸಲಾಗಿದೆ.<br>1. ಸಾಲ ಪಡೆಯುವ ರೈತರು ಹಾಲು ಉತ್ಪಾದಕ ಸಹಕಾರ ಸಂಘಗಳಿಗೆ ಕಡ್ಡಾಯವಾಗಿ ಹಾಲು ಪೂರೈಕೆ ಮಾಡುತ್ತಿದ್ದು, ಸಾಲದ ಅರ್ಜಿಯನ್ನು ಹಾಲು ಉತ್ಪಾದಕ ಸಹಕಾರ ಸಂಘಗಳು ಸಂಬಂಧಿಸಿದ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ಅಥವಾ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ. ಇದಕ್ಕೆ ಸಲ್ಲಿಸತಕ್ಕದ್ದು. ಜಿಲ್ಲಾ ಬ್ಯಾಂಕುಗಳು ಅರ್ಹ ರೈತರಿಗೆ ಸಾಲ ವಿತರಿಸತಕ್ಕದ್ದು.<br>2. ಈ ಯೋಜನೆಯು ಒಬ್ಬ ಫಲಾನುಭವಿಗೆ ಗರಿಷ್ಟ ರೂ. 2.00 ಲಕ್ಷಗಳವರೆಗೆ ಸಾಲ ನೀಡಲು ಅನ್ವಯವಾಗುತ್ತದೆ. ಹಾಗೂ ಒಂದು ಕುಟುಂಬಕ್ಕೆ ಬೆಳೆ ಸಾಲ ಮತ್ತು ಪಶುಸಂಗೋಪನೆ ಸಾಲ ಸೇರಿ ಒಟ್ಟು ರೂ. 3.00 ಲಕ್ಷ ಮೀರುವಂತಿಲ್ಲ.<br>3. ಸರ್ಕಾರಿ/ಸಹಕಾರಿ ಸ್ವಾಮ್ಯದ ಸಂಸ್ಥೆಗಳಲ್ಲಿ ನೌಕರನಾಗಿದ್ದು, ಮಾಸಿಕ ರೂ. 20000/- ಗಳ ವೇತನ/ಪಿಂಚಣಿ ಪಡೆಯುತ್ತಿರುವ ಅಥವಾ ಕಳೆದ 3 ವರ್ಷಗಳಲ್ಲಿ ಆದಾಯ ತೆರಿಗೆ ಪಾವತಿಸಿದ್ದರೆ ಅಂತಹ ರೈತರಿಗೆ ರಾಜ್ಯ ಸರ್ಕಾರದ ಬಡ್ಡಿ ಪ್ರೋತ್ಸಾಹಧನ ದೊರೆಯುವುದಿಲ್ಲ. |
| | | 4. ಈ ಸಾಲವು ಗರಿಷ್ಟ ಒಂದು ವರ್ಷದ ಅವಧಿ ಹೊಂದಿರುತ್ತದೆ. |

| | | |
|---|---|---|
| ಆ) | ಈ ಯೋಜನೆಯಡಿ ಹಾಸನ ಜಿಲ್ಲೆಯಲ್ಲಿ ಎಷ್ಟು ಮೊತ್ತವನ್ನು ಇಲ್ಲಿಯವರೆಗೆ ಸಾಲವಾಗಿ ನೀಡಲಾಗಿದೆ; (ಫಲಾನುಭವಿ ಹೆಸರು ಮತ್ತು ಸಂಘದ ವಿವರಗಳೊಂದಿಗೆ ತಾಲ್ಲೂಕುವಾರು ಮಾಹಿತಿ ನೀಡುವುದು) | ಈ ಯೋಜನೆಯಡಿ ಹಾಸನ ಜಿಲ್ಲೆಯಲ್ಲಿ ಹೈನುಗಾರಿಕೆ ಉದ್ದೇಶಕ್ಕಾಗಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ. ಹಾಸನ ಇದರ ಮೂಲಕ 22393 ಫಲಾನುಭವಿಗಳಿಗೆ ರೂ.22.39 ಕೋಟಿಗಳ ಸಾಲ ವಿತರಿಸಿರುತ್ತಾರೆ. ಸಂಘವಾರು, ಫಲಾನುಭವಿವಾರು ಮತ್ತು ತಾಲ್ಲೂಕುವಾರು ಮಾಹಿತಿಯನ್ನು **ಸಿಡಿ ರೂಪದಲ್ಲಿ ನೀಡಲಾಗಿದೆ.** |
| (ಇ) | ಹಾಲು ಉತ್ಪಾದಕರ ಸಹಕಾರ ಸಂಘಗಳಲ್ಲಿ ಸದಸ್ಯರಿಗೆ ಸಾಲ ವಿತರಣೆ ಮಾಡುವಾಗ ಸರ್ಕಾರದ ಮಾರ್ಗಸೂಚಿಗಳನ್ನು ಪಾಲನೆ ಮಾಡದೆ ತಾರತಮ್ಯ ನೀತಿ ಅನುಸರಿಸುತ್ತಿರುವುದರಿಂದ ಸದಸ್ಯರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಹಾಸನ ಜಿಲ್ಲೆಯಲ್ಲಿ ಇಂತಹ ಎಷ್ಟು ಪ್ರಕರಣಗಳು ಬೆಳಕಿಗೆ ಬಂದಿವೆ; ಇಂತಹ ಪ್ರಕರಣಗಳಲ್ಲಿ ಭಾಗಿಯಾಗಿರುವವರ ವಿರುದ್ಧ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ? (ಪ್ರಕರಣವಾರು ಮಾಹಿತಿ ನೀಡುವುದು) | ಹಾಸನ ಜಿಲ್ಲೆಯ ಹಾಲು ಉತ್ಪಾದಕರ ಸಹಕಾರ ಸಂಘಗಳಲ್ಲಿ ಸದಸ್ಯರಿಗೆ ಸಾಲ ವಿತರಣೆ ಮಾಡುವಾಗ ಸರ್ಕಾರದ ಮಾರ್ಗಸೂಚಿಗಳನ್ನು ಪಾಲನೆ ಮಾಡದೆ ತಾರತಮ್ಯ ನೀತಿ ಅನುಸರಿಸಿರುವ ಪ್ರಕರಣಗಳು ವರದಿಯಾಗಿರುವುದಿಲ್ಲ. |

**ಸಂಖ್ಯೆ: ಸಿಒ 9 ಸಿಸಿಬಿ 2021**

ಎಸ್.ಟಿ. ಸೋಮಶೇಖರ್

**(ಎಸ್.ಟಿ. ಸೋಮಶೇಖರ್)**
ಸಹಕಾರ ಸಚಿವರು